## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1443 (1699)
2. ಮಾನ್ಯ ಸದಸ್ಯರ ಹೆಸರು : ಶ್ರೀ ಐವನ್ ಡಿ'ಸೋಜಾ
3. ಉತ್ತರಿಸಬೇಕಾದ ದಿನಾಂಕ : 23.03.2020
4. ಉತ್ತರಿಸುವ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆಗಳು</th><th colspan="2">ಉತ್ತರಗಳು</th></tr>
<tr><td>ಅ)</td><td>ರಾಜ್ಯದಲ್ಲಿ ಎಷ್ಟು ಪಿ.ಜಿ. ಸೀಟುಗಳಿವೆ? ಯಾವ ಕಾಲೇಜುಗಳಲ್ಲಿವೆ? ಸರ್ಕಾರಕ್ಕೆ ನೀಡಲಾದ ಸೀಟುಗಳು ಎಷ್ಟು? ಖಾಸಗಿ ಕಾಲೇಜುಗಳಿಗೆ ನೀಡಲಾದ ಸೀಟುಗಳು ಎಷ್ಟು? (ವಿವರ ನೀಡುವುದು)</td><td colspan="2">ರಾಜ್ಯದಲ್ಲಿ ಪಿ.ಜಿ. ಸೀಟುಗಳ ಸಂಖ್ಯೆ=2340.<br>ಸರ್ಕಾರಕ್ಕೆ ನೀಡಲಾದ ಸೀಟುಗಳ ಸಂಖ್ಯೆ=1054<br>ಖಾಸಗಿ ಕಾಲೇಜುಗಳಿಗೆ ನೀಡಲಾದ ಸೀಟುಗಳ ಸಂಖ್ಯೆ=836<br>ಎನ್ ಆರ್ಐ ಸೀಟುಗಳ ಸಂಖ್ಯೆ=271<br>ಇತರೆ ಸೀಟುಗಳ ಸಂಖ್ಯೆ=179</td></tr>
<tr><td rowspan="8">ಆ)</td><td rowspan="8">ರಾಜ್ಯದಲ್ಲಿ ಎಷ್ಟು ವೈದ್ಯಕೀಯ ಕಾಲೇಜುಗಳಲ್ಲಿ ನರ್ಸಿಂಗ್ ಶಿಕ್ಷಣದ ಕಾಲೇಜುಗಳಿವೆ? ಸರ್ಕಾರದಿಂದ ಎಷ್ಟು ನರ್ಸಿಂಗ್ ಕಾಲೇಜುಗಳು ನಡೆಸಲ್ಪಡುತ್ತಿವೆ? (ವಿವರ ನೀಡುವುದು)</td><td colspan="2">ರಾಜ್ಯದಲ್ಲಿ 08 ವೈದ್ಯಕೀಯ ಕಾಲೇಜುಗಳಲ್ಲಿ ನರ್ಸಿಂಗ್ ಶಿಕ್ಷಣದ ಕಾಲೇಜುಗಳಿವೆ.<br>1) ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು.<br>2) ಮೈಸೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಮೈಸೂರು.<br>3) ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ.<br>4) ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ.<br>5) ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹೊಳೆನರಸಿಪುರ ಹಾಗೂ ಹಾಸನ.<br>6) ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೆಳಗಾಂ.<br>7) ಗದಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಗದಗ<br>8) ಗುಲ್ಬರ್ಗಾ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಗುಲ್ಬರ್ಗಾ<br><br>ಸರ್ಕಾರದಿಂದ 7 ನರ್ಸಿಂಗ್ ಕಾಲೇಜುಗಳು ನಡೆಸಲ್ಪಡುತ್ತಿವೆ</td></tr>
<tr><td>ಇಎಸ್ಐಸಿ ಆಸ್ಪತ್ರೆ, ಬೆಂಗಳೂರು.</td><td rowspan="2">ಕೇಂದ್ರ ಸರ್ಕಾರ</td></tr>
<tr><td>ಇಎಸ್ಐ ಆಸ್ಪತ್ರೆ, ಗುಲ್ಬರ್ಗಾ.</td></tr>
<tr><td>ಸಂಜಯ್‌ಗಾಂಧಿ, ಆಸ್ಪತ್ರೆ, ಬೆಂಗಳೂರು.</td><td rowspan="3">ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.</td></tr>
<tr><td>ಜಿಲ್ಲಾ ಆಸ್ಪತ್ರೆ, ಬಿಜಾಪುರ.</td></tr>
<tr><td>ಜಿಲ್ಲಾ ಆಸ್ಪತ್ರೆ, ತುಮಕೂರು.</td></tr>
<tr><td>ಎಸ್‌ಡಿಎಸ್ ಮತ್ತು ಟಿ.ಬಿ, ಆಸ್ಪತ್ರೆ ಬೆಂಗಳೂರು.</td><td rowspan="2">ವೈದ್ಯಕೀಯ ಶಿಕ್ಷಣ ಇಲಾಖೆ.</td></tr>
<tr><td>ಕಿದ್ವಾಯಿ ಸ್ಮಾರಕ ಗಂಥಿ ಆಸ್ಪತ್ರೆ, ಬೆಂಗಳೂರು.</td></tr>
</table>

| | | |
|---|---|---|
| ಇ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸರ್ಕಾರಿ ಮೆಡಿಕಲ್ ಕಾಲೇಜು ಪ್ರಾರಂಭಿಸುವ ಪ್ರಸ್ತಾವನೆ ಯಾವ ಹಂತದಲ್ಲಿದೆ? (ವಿವರ ನೀಡುವುದು) | ಕೇಂದ್ರ ಸರ್ಕಾರದ ಯೋಜನೆಯನ್ವಯ ಸರ್ಕಾರಿ / ಖಾಸಗಿ ವೈದ್ಯಕೀಯ ಕಾಲೇಜುಗಳಿರದ ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲು ಅವಕಾಶವಿರುತ್ತದೆ. ಈ ಯೋಜನೆ ಅಡಿ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಪಾಲು ಶೇ.60:40 ರ ಅನುಪಾತದಲ್ಲಿ ಒಟ್ಟು ರೂ.325.00 ಕೋಟಿಗಳ ಅನುದಾನ ಲಭ್ಯವಾಗಲಿದೆ.<br><br>ಸದರಿ ಯೋಜನೆಯನ್ವಯ ಖಾಸಗಿ / ಸರ್ಕಾರಿ ವೈದ್ಯಕೀಯ ಕಾಲೇಜುಗಳಿರದ ಜಿಲ್ಲೆಗಳಾದ ಹಾವೇರಿ, ಯಾದಗಿರಿ, ಚಿಕ್ಕಮಗಳೂರು ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲು ಈಗಾಗಲೇ ಕ್ರಮವಹಿಸಲಾಗಿದೆ.<br><br>ಇನ್ನುಳಿದಂತೆ ತುಮಕೂರು, ಚಿತ್ರದುರ್ಗ, ಬಾಗಲಕೋಟೆ, ಕೋಲಾರ, ದಕ್ಷಿಣ ಕನ್ನಡ ಮತ್ತು ವಿಜಯಪುರ ಇಲ್ಲಿ ಈಗಾಗಲೇ ಖಾಸಗಿ ವೈದ್ಯಕೀಯ ಕಾಲೇಜುಗಳು ಕಾರ್ಯ ನಿರ್ವಹಿಸುತ್ತಿರುವುದರಿಂದ, ಈ ಜಿಲ್ಲಾ ಕೇಂದ್ರಗಳಲ್ಲಿ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸುವುದು ಕೇಂದ್ರ ಸರ್ಕಾರದ ಯೋಜನೆಯ ವ್ಯಾಪ್ತಿಗೆ ಒಳಪಡುವುದಿಲ್ಲ.<br><br>ರಾಜ್ಯ ಸರ್ಕಾರದ ವತಿಯಿಂದ ಹೊಸ ಸರ್ಕಾರಿ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಅಂದಾಜು ರೂ.525.00 ಕೋಟಿಗಳ ಅನಾವರ್ತಕ ವೆಚ್ಚ ಹಾಗೂ ರೂ.42.75 ಕೋಟಿಗಳ ಆವರ್ತಕ ವೆಚ್ಚದ ಅವಶ್ಯಕತೆ ಇರುತ್ತದೆ.<br><br>ಪ್ರಸ್ತುತ ಅನುದಾನದ ಕೊರತೆಯ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರದ ವತಿಯಿಂದಲೇ ಪೂರ್ಣ ವೆಚ್ಚ ಭರಿಸಿ, ಹೊಸ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸುವ ಯಾವುದೇ ಪ್ರಸ್ತಾವನೆಗಳು ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ |
| ಈ) | ರಾಜ್ಯದ ಎಷ್ಟು ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲಾಗಿದೆ? ಇದರಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗುತ್ತದೆ? (ವಿವರ ನೀಡುವುದು) | ರಾಜ್ಯದ 16 ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲಾಗಿದ್ದು, ವಿದ್ಯಾರ್ಥಿಗಳ ಪ್ರವೇಶಮಿತಿಯ ವಿವರಗಳನ್ನು <u>ಅನುಬಂಧ</u> ದಲ್ಲಿ ಒದಗಿಸಲಾಗಿದೆ. |

**ಸಂಖ್ಯೆ:** ಎಂಇಡಿ 47 ಆರ್‌ಜಿಯು 2020

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

## ಅನುಬಂಧ

| ಕ್ರ.ಸ | ಕಾಲೇಜುಗಳ ಹೆಸರು | ವಿದ್ಯಾರ್ಥಿಗಳು |
|---|---|---|
| 01 | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು. | 250 |
| 02 | ಮೈಸೂರು ವೈದ್ಯಕೀಯ ಕಾಲೇಜು ಹಾಗೂ ಸಂಶೋಧನಾ ಸಂಸ್ಥೆ, ಮೈಸೂರು. | 150 |
| 03 | ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ. | 200 |
| 04 | ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ. | 150 |
| 05 | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್. | 150 |
| 06 | ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ರಾಯಚೂರು. | 150 |
| 07 | ಬೆಳಗಾವಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೆಳಗಾವಿ. | 150 |
| 08 | ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಶಿವಮೊಗ್ಗ. | 150 |
| 09 | ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹಾಸನ. | 150 |
| 10 | ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮಂಡ್ಯ | 150 |
| 11 | ಚಾಮರಾಜನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಚಾಮರಾಜನಗರ. | 150 |
| 12 | ಕೊಡಗು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮಡಿಕೇರಿ. | 150 |
| 13 | ಗುಲ್ಬರ್ಗಾ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಕಲಬುರಗಿ. | 150 |
| 14 | ಕೊಪ್ಪಳ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಕೊಪ್ಪಳ. | 150 |
| 15 | ಕಾರವಾರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಕಾರವಾರ. | 150 |
| 16 | ಗದಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಗದಗ. | 150 |
| 17 | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು. | 150 |
| | ಒಟ್ಟು | 2700 |